# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಫೆಬ್ರವರಿ ೧೬, ೨೦೧೨ (ಮಾಘ ೨೭, ಶಕ ವರ್ಷ ೧೯೩೩) | ಸಂಚಿಕೆ ೭ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕಂದಾಯ ಇಲಾಖೆ**

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಮಂಡ್ಯ ಜಿಲ್ಲೆ, ಮಂಡ್ಯ.**

**ಸಂ:ಸಿಬ್ಬಂದಿ(1)ಸಿಆರ್:205/2010–11 ದಿನಾಂಕ: 28–01–2012.**

**ಅಧಿಕೃತ ಜ್ಞಾಪನ**

**ವಿಷಯ:–** ಮಂಡ್ಯ ಜಿಲ್ಲಾ ಕಂದಾಯ ಘಟಕದಲ್ಲಿ ಗ್ರಾಮ ಲೆಕ್ಕಿಗರ ಖಾಲಿ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಬಗ್ಗೆ.

**ಉಲ್ಲೇಖ:–** ಸರ್ಕಾರದ ಅಧಿಸೂಚನೆ ಸಂ:ಆರ್‌ಡಿ 299ಬಿಎಸ್‌ಸಿ 2006 ದಿನಾಂಕ:3–2–2009

2) ಸರ್ಕಾರದ ಅಧಿಸೂಚನೆ ಸಂ.ಕಂ.ಇ 299 ಬಿಎಸ್‌ಸಿ 2006 ದಿನಾಂಕ:24–7–2009 ಮತ್ತು 8–9–2009.

3) ಸರ್ಕಾರದ ಪತ್ರ ಸಂ.ಕಂ.ಇ 04 ಬಿಎಸ್‌ಸಿ 2011. ದಿನಾಂಕ: 25–02–2011.

4) ಈ ಕಾರ್ಯಾಲಯದ ಸಮಸಂಖ್ಯೆಯ ಅಧಿಸೂಚನೆ ದಿನಾಂಕ:20–04–2011.

5) ಈ ಕಾರ್ಯಾಲಯದ ಸಮಸಂಖ್ಯೆಯ ಅಂತಿಮ ಆಯ್ಕೆ ಪಟ್ಟಿ ಪ್ರಕಟಣಾ ದಿನಾಂಕ: 22–09–2011.

ಸರ್ಕಾರದ ಉಲ್ಲೇಖ (1)ಮತ್ತು (2)ರ ಅಧಿಸೂಚನೆಯನ್ವಯ ಮಂಡ್ಯ ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಿಗರ ಹುದ್ದೆಗಳನ್ನು **1977ರ ಗ್ರಾಮಲೆಕ್ಕಿಗರ ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿ ದಿನಾಂಕ:24–7–2009ರನ್ವಯ** ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಸರ್ಕಾರವು ಉಲ್ಲೇಖ (3) ರ ಪತ್ರದಲ್ಲಿ ಅನುಮೋದನೆ ನೀಡಿದೆ.

ಕರ್ನಾಟಕ ನಾಗರೀಕ ಸೇವೆ (Revenue subordinate branch)(cadre and recruitment)(amendment) ನಿಯಮಗಳು, 2009 ರಲ್ಲಿ ನಿಗದಿಪಡಿಸಿರುವ ವಿದ್ಯಾರ್ಹತೆ ಅನ್ವಯ ಮಂಡ್ಯ ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇರುವ 59 ಗ್ರಾಮ ಲೆಕ್ಕಿಗರ ಹುದ್ದೆಗಳನ್ನು ಭರ್ತಿಗೊಳಿಸಲು ಉಲ್ಲೇಖ(4)ರ ಅಧಿಸೂಚನೆಯ ಮೂಲಕ, ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದ್ದು, ದಿನಾಂಕ:23–05–2011ರವರೆಗೆ ಸ್ವೀಕೃತಿಯಾದ ಅರ್ಜಿಗಳನ್ನು ಅರ್ಹತೆ ಮತ್ತು ಮೀಸಲಾತಿ ಅನ್ವಯ ವಿಂಗಡಿಸಿ ಅರ್ಹ ಅಭ್ಯರ್ಥಿಗಳ ತಾತ್ಕಾಲಿಕ ಪರಿಶೀಲನಾ ಪಟ್ಟಿಯನ್ನು ದಿನಾಂಕ:08–08–2011 ರಂದು ಪ್ರಕಟಿಸಿ ಆಕ್ಷೇಪಣೆ/ತಕರಾರು ಇದ್ದಲ್ಲಿ ಆಕ್ಷೇಪಣೆಗಳನ್ನು ದಿನಾಂಕ: 22–08–2011ರವರೆಗೆ ಸಲ್ಲಿಸಲು ತಿಳಿಸಲಾಗಿತ್ತು.

ಅರ್ಹ ಅಭ್ಯರ್ಥಿಗಳ ಮೂಲ ದಾಖಲೆಗಳನ್ನು ಕ್ರಮವಾಗಿ ದಿನಾಂಕ:06–09–2011 ಮತ್ತು ದಿನಾಂಕ:07–09–2011 ರಂದು ಪರಿಶೀಲಿಸಿ, ಅಂತಿಮ ಆಯ್ಕೆ ಪಟ್ಟಿಯನ್ನು ದಿನಾಂಕ: 22–09–2011 ರಂದು ಪ್ರಕಟಿಸಲಾಗಿದೆ.

ಅಂತಿಮವಾಗಿ ಆಯ್ಕೆಯಾದ ಅಭ್ಯರ್ಥಿಗಳು ಈಗಾಗಲೇ ನೀಡಿರುವ ಮೀಸಲಾತಿ ಸಿಂಧುತ್ವ ಪ್ರಮಾಣ ಪತ್ರ ಹಾಗೂ ಗುಣ ನಡತೆ ಪ್ರಮಾಣ ಪತ್ರಗಳನ್ನು ಸಂಬಂದಪಟ್ಟ ಪೋಲೀಸ್ ಹಾಗೂ ಜಿಲ್ಲಾಧಿಕಾರಿಗಳು ಪರಿಶೀಲನೆ ಮಾಡಿ ನೀಡಿರುವ ದೃಢೀಕರಣ ಪತ್ರಗಳನ್ನು ಅನುಸರಿಸಿ,ಈ ಕೆಳಕಂಡ ಅಭ್ಯರ್ಥಿಗಳನ್ನು **ಗ್ರಾಮ ಲೆಕ್ಕಿಗರ ಹುದ್ದೆಗೆ ರೂ 5800–100–6000–125–6500–150–7100–175–7800–200–8600–225–9500–250–10500**

**ರ ವೇತನ ಶ್ರೇಣಿಯಲ್ಲಿ** ಅವರ ಹೆಸರಿನ ಎದುರು ನಮೂದಿಸಲ್ಪಟ್ಟ ಗ್ರಾಮಲೆಕ್ಕಿಗ ವೃತ್ತ ಮತ್ತು ಭೂಮಿ ಕೇಂದ್ರಕ್ಕೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ನೇಮಕಾತಿ ಮಾಡಿ ಆದೇಶ ಹೊರಡಿಸಿದೆ.

| **ಕ್ರಸಂ** | **ಅಭ್ಯರ್ಥಿಯ ಹೆಸರು ಮತ್ತು ವಿಳಾಸ** | **ಕರ್ತವ್ಯ ನಿರ್ವಹಿಸಬೇಕಾದ ಕಛೇರಿ /ವೃತ್ತ** | **ಯಾವ ಕಛೇರಿಯಲ್ಲಿ ಹಾಜರಾಗಬೇಕು.** |
|---|---|---|---|
| | **ಸಾಮಾನ್ಯವರ್ಗ** | | |
| 1 | ಗುಣಶೇಖರ.ಸಿ. ಬಿನ್ ಚಿಕ್ಕಣ್ಣ ಎಸ್.ಐ.ಹಾಗಲಹಳ್ಳಿ, ಸಿ.ಎ.ಕೆರೆ ಹೋಬಳಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ, ಮಂಡ್ಯ–571 422 | ಮಂಗಲ ವೃತ್ತ, ಕೊತ್ತತ್ತಿ ಹೋಬಳಿ, ಮಂಡ್ಯ ತಾಲ್ಲೂಕು. | ತಹಸೀಲ್ದಾರ್, ಮಂಡ್ಯ ತಾಲ್ಲೂಕು. |
| 2 | ಮಧುಶ್ರೀ.ಎಂ.ಎನ್. ಬಿನ್ ನಾಗರಾಜು.ಎಂ., ನಂ.118, ಚಿಕ್ಕೇಗೌಡನದೊಡ್ಡಿ, ಮಂಡ್ಯ ತಾ:ಮಂಡ್ಯ–571 403 | ಭೂಮಿ ಕೇಂದ್ರ ಪಾಂಡವಪುರ ತಾಲ್ಲೂಕು. | ತಹಸೀಲ್ದಾರ್, ಪಾಂಡವಪುರ ತಾಲ್ಲೂಕು. |
| 3. | ಸುಹಾಸ್.ಎನ್.ಎಸ್. ಬಿನ್ ಶಂಕರನಾರಾಯಣ.ಆರ್., ನಂ.7ಎ/684, 14ನೇ ಕ್ರಾಸ್, ಬಸವೇಶ್ವರನಗರ, ಕೊಳ್ಳೇಗಾಲ, ಚಾಮರಾಜನಗರ–571 440. | ನೆಲಮನೆ ವೃತ್ತ, ಕೆ.ಶೆಟ್ಟಿಹಳ್ಳಿ 1ನೇ ವೃತ್ತ, ಶ್ರೀರಂಗಪಟ್ಟಣ ತಾಲ್ಲೂಕು. | ತಹಸೀಲ್ದಾರ್, ಶ್ರೀರಂಗಪಟ್ಟಣ ತಾಲ್ಲೂಕು. |
| 4 | ಮಂಜುನಾಥ.ಎಸ್. ಬಿನ್ ಶಿವಾನಂದಪ್ಪ, ಅಳಾಲಸಂದ್ರ, ಎ.ವೆಂಕಟಪುರ ಪೋಸ್ಟ್, ಕೊರಟಗೆರೆ ತಾಲ್ಲೂಕು, ತುಮಕೂರು–572 129. | ತಗ್ಗಹಳ್ಳಿ ವೃತ್ತ , ಕೊತ್ತತ್ತಿ ಹೋಬಳಿ, ಮಂಡ್ಯ ತಾಲ್ಲೂಕು | ತಹಸೀಲ್ದಾರ್ ಮಂಡ್ಯ ತಾಲ್ಲೂಕು |
| 5 | ರವಿ ಬಡಿಗೇರ್ ಬಿನ್ ಕೃಷ್ಣಪ್ಪ, ತುಳಸಿಗೇರಿ ಗ್ರಾಮ & ಪೋಸ್ಟ್, ಬಾಗಲಕೋಟೆ ತಾಲ್ಲೂಕು ಮತ್ತು ಜಿಲ್ಲೆ | ಬೇವಿನಕುಪ್ಪೆ , ಕಸಬಾ ಹೋಬಳಿ–1, ಪಾಂಡವಪುರ ತಾಲ್ಲೂಕು | ತಹಸೀಲ್ದಾರ್, ಪಾಂಡವಪುರ ತಾಲ್ಲೂಕು |
| 6 | ಮಾನಸ.ಆರ್. ಬಿನ್ ರೇವಣ್ಣ, 10ನೇ ಕ್ರಾಸ್, ಶಂಕರನಗರ, ಚರ್ಚ್ ಹತ್ತಿರ, ಮಂಡ್ಯ ಸಿಟಿ, ಮಂಡ್ಯ–571 401. | ಉರಮಾರಕಸಲಗೆರೆ ವೃತ್ತ, ಕೊತ್ತತ್ತಿ ಹೋಬಳಿ, ಮಂಡ್ಯ ತಾಲ್ಲೂಕು | ತಹಸೀಲ್ದಾರ್, ಮಂಡ್ಯ ತಾಲ್ಲೂಕು |
| 7 | ಗೀತಾ.ಕೆ. ಬಿನ್ ಕುನ್ನಶೆಟ್ಟಿ, 4ನೇ ಕ್ರಾಸ್, ಜಯಲಕ್ಷ್ಮಿಚಿತ್ರಮಂದಿರ ಹಿಂಭಾಗ, ಗುತ್ತಲು ರಸ್ತೆ, ಮಂಡ್ಯ–571 403. | ಬೇವುಕಲ್ಲು ವೃತ್ತ, ದುದ್ದ ಹೋಬಳಿ, ಮಂಡ್ಯ ತಾಲ್ಲೂಕು | ತಹಸೀಲ್ದಾರ್, ಮಂಡ್ಯ ತಾಲ್ಲೂಕು |
| 8 | ಮರುಳಸಿದ್ದೇಶ್ವರ.ಎಸ್.ಬಿ. ಬಿನ್ ಹನುಮಂತಪ್ಪ.ಎಸ್.ಬಿ. ಸೊಕ್ಕೆ ಗ್ರಾಮ & ಪೋಸ್ಟ್, ಜಗಳೂರು ತಾಲ್ಲೂಕು. ದಾವಣಗೆರೆ ಜಿಲ್ಲೆ–577528 | ಕಿರಂಗೂರು ವೃತ್ತ, ಕೆ.ಶೆಟ್ಟಿಹಳ್ಳಿ ಹೋಬಳಿ 1ನೇ ವೃತ್ತ, ಶ್ರೀರಂಗಪಟ್ಟಣ ತಾಲ್ಲೂಕು | ತಹಸೀಲ್ದಾರ್, ಶ್ರೀರಂಗಪಟ್ಟಣ ತಾಲ್ಲೂಕು |
| 9 | ಪೂರ್ಣಿಮ.ಎಸ್.ಜಿ. ಬಿನ್ ಗೋವಿಂದರಾಜು.ಎಸ್.ವೈ. C/o ವಿ.ಲಕ್ಷ್ಮೀದೇವಮ್ಮ ಸರ್ಕಾರಿ ಲೇಡಿಸ್ ಹಾಸ್ಟೆಲ್, ಬೆತ್‌ಮಂಗಲ, ಬಂಗಾರಪೇಟೆ ತಾಲ್ಲೂಕು ಕೋಲಾರ ಜಿಲ್ಲೆ–563 116. | ಹುಲಿಗೆರೆಪುರ ವೃತ್ತ, ಕಸಬಾ ಹೋಬಳಿ 2ನೇ ವೃತ್ತ, ಮದ್ದೂರು ತಾಲ್ಲೂಕು | ತಹಸೀಲ್ದಾರ್, ಮದ್ದೂರು ತಾಲ್ಲೂಕು |
| 10 | ಸಾವಿತ್ರಿ.ಕೆ. ಬಿನ್ ಮಲ್ಲಪ್ಪ.ಕೆ. ಇಟ್ಟಗಿ ಗ್ರಾಮ &ಅಂಚೆ ಹೂವಿನ ಹಡಗಲಿ ತಾಲ್ಲೂಕು, ಬಳ್ಳಾರಿ–583220 | ಭೂಮಿ ಕೇಂದ್ರ , ಕೆ.ಆರ್. ಪೇಟೆ ತಾಲ್ಲೂಕು ಕಛೇರಿ | ತಹಸೀಲ್ದಾರ್, ಕೆ.ಆರ್.ಪೇಟೆ ತಾಲ್ಲೂಕು |

| ಕ್ರ.ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಕರ್ತವ್ಯ ನಿರ್ವಹಿಸಬೇಕಾದ ಕಛೇರಿ /ವೃತ್ತ | ಯಾವ ಕಛೇರಿಯಲ್ಲಿ ಹಾಜರಾಗಬೇಕು. |
|---|---|---|---|
| 11 | ಮಹೇಂದ್ರ.ಬಿ. ಬಿನ್ ಶಿವಣ್ಣ.ಬಿ., ನೀಲವಂಜಿ ಗ್ರಾಮ ಬೆನ್ನಿಹಳ್ಳಿ ಪೋಸ್ಟ್, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ–583 127 | ದರಸಗುಪ್ಪೆ ವೃತ್ತ, ಕೆ.ಶೆಟ್ಟಿಹಳ್ಳಿ ಹೋಬಳಿ 1ನೇ ವೃತ್ತ, ಶ್ರೀರಂಗಪಟ್ಟಣ ತಾಲ್ಲೂಕು | ತಹಸೀಲ್ದಾರ್. ಶ್ರೀರಂಗಪಟ್ಟಣ |
| 12 | ಅಂಜನಪ್ಪ ಮಡ್ಡಿ ಬಿನ್ ಬಸಪ್ಪ ಮಡ್ಡಿ, ಹೊಸ ಓಬಳಾಪುರ ಗ್ರಾಮ ನೀಚಾಪುರ ಪೋಸ್ಟ್,ಹರಪನಹಳ್ಳಿ ತಾಲ್ಲೂಕು, ದಾವಣಗೆರೆ–583 127 | ಕೆ.ಶೆಟ್ಟಿಹಳ್ಳಿ ವೃತ್ತ, ಚಿಕ್ಕರಸಿನಕೆರೆ ಹೋಬಳಿ 2ನೇ ವೃತ್ತ, ಮದ್ದೂರು ತಾಲ್ಲೂಕು | ತಹಸೀಲ್ದಾರ್, ಮದ್ದೂರು ತಾಲ್ಲೂಕು |
| 13 | ರೂಪಶ್ರೀ.ಕೆ. ಬಿನ್ ಕೆಂಚೆನಗೌಡ.ಕೆ. ಕನ್ನಾಯ್ಕನಕಟ್ಟೆ, ಅಯ್ಯನಹಳ್ಳಿ ಪೋಸ್ಟ್, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ–583 134. | ಭೂಮಿಕೇಂದ್ರ, ಕೆ.ಆರ್. ಪೇಟೆ ತಾಲ್ಲೂಕು ಕಛೇರಿ | ತಹಸೀಲ್ದಾರ್, ಕೆ.ಆರ್.ಪೇಟೆ ತಾಲ್ಲೂಕು |
| 14 | ಮಹದೇವಪ್ಪ ಬಸಾಪುರ್ ಬಿನ್ ಫಕೀರಪ್ಪ ಬಸ್ಸಪುರ್, ಸಾ:ಹಸನಾಬಾದಿ,ಹುಲ್ಲಹಟ್ಟಿ ಅಂಚೆ ಹಾನಗಲ್ ತಾಲ್ಲೂಕು ಹಾವೇರಿ–581 104. | ಮಾಣಿಕ್ಯನಹಳ್ಳಿ ವೃತ್ತ, ಮೇಲುಕೋಟೆ ಹೋಬಳಿ, ಪಾಂಡವಪುರ ತಾಲ್ಲೂಕು | ತಹಸೀಲ್ದಾರ್, ಪಾಂಡವಪುರ |
| 15 | ಪುಷ್ಪಲತಾ.ಎಸ್. ಬಿನ್ ಸುರೇಶ್, ವೀರಭದ್ರ ದೇವಸ್ಥಾನ ರಸ್ತೆ, ನಾಗಮಂಗಲ ಟೌನ್, ಮಂಡ್ಯ–571 432 | ಬ್ರಹ್ಮದೇವರಹಳ್ಳಿ ವೃತ್ತ, ಹೊಣಕೆರೆ ಹೋಬಳಿ, ನಾಗಮಂಗಲ ತಾಲ್ಲೂಕು | ತಹಸೀಲ್ದಾರ್, ನಾಗಮಂಗಲ ತಾಲ್ಲೂಕು |
| | **ಪರಿಶಿಷ್ಠ ಜಾತಿ** | | |
| 16 | ರಂಜಿತ.ಪಿ. ಬಿನ್ ಪುಟ್ಟಸ್ವಾಮಿ, ಉಕ್ಕಲಗೆರೆ ಗ್ರಾಮ & ಪೋಸ್ಟ್, ಟಿ.ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ, ಮೈಸೂರು–571 124. | ಭೂಮಿಕೇಂದ್ರ, ಮಳವಳ್ಳಿ ತಾಲ್ಲೂಕು ಕಛೇರಿ | ತಹಸೀಲ್ದಾರ್, ಮಳವಳ್ಳಿ ತಾಲ್ಲೂಕು |
| 17 | ಮಧುಶ್ರೀ.ಎಂ.ಎನ್. ಬಿನ್ ನಾರಾಯಣಪ್ಪ.ಜಿ.ಟಿ., ಮಾರುತಿನಗರ, ಮಿಡಿಗೇಶಿ ಅಂಚೆ ಮಧುಗಿರಿ ತಾಲ್ಲೂಕು, ತುಮಕೂರು– 572 133 | ಭೂಮಿಕೇಂದ್ರ, ಮಂಡ್ಯ ತಾಲ್ಲೂಕು ಕಛೇರಿ, | ತಹಸೀಲ್ದಾರ್, ಮಂಡ್ಯ ತಾಲ್ಲೂಕು |
| 18 | ಸೌಮ್ಯ.ಸಿ. ಬಿನ್ ಚನ್ನಬಸಪ್ಪ.ಕೆ.ಹೆಚ್. ಕಲ್ಲೇದೇವರಪುರ ಗ್ರಾಮ & ಪೋಸ್ಟ್, ಜಗಳೂರು ತಾಲ್ಲೂಕು, ದಾವಣಗೆರೆ–577 528. | ಭೂಮಿಕೇಂದ್ರ, ಪಾಂಡವಪುರ ತಾಲ್ಲೂಕು ಕಛೇರಿ, | ತಹಸೀಲ್ದಾರ್. ಪಾಂಡವಪುರ ತಾಲ್ಲೂಕು |
| 19 | ಎಂ.ಕಲಾವತಿ ಬಿನ್ ಮಾದೇವಶೆಟ್ಟಿ, ಮಂಚಾಪುರ ಗ್ರಾಮ ಮತ್ತು ಅಂಚೆ ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ–571444. | ಭೂಮಿಕೇಂದ್ರ, ಮಳವಳ್ಳಿ ತಾಲ್ಲೂಕು ಕಛೇರಿ, | ತಹಸೀಲ್ದಾರ್, ಮಳವಳ್ಳಿ ತಾಲ್ಲೂಕು |

| ಕ್ರ.ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಕರ್ತವ್ಯ ನಿರ್ವಹಿಸಬೇಕಾದ ಕಛೇರಿ /ವೃತ್ತ | ಯಾವ ಕಛೇರಿಯಲ್ಲಿ ಹಾಜರಾಗಬೇಕು. |
|---|---|---|---|
| 20 | ಶಾಸಪ್ಪ.ಎಂ.ಎನ್. ಬಿನ್ ಕೆಂಚವ್ವ ಎಂ.ಎನ್ ಹಲುವಾಗಲು ಗ್ರಾಮ @ ಪೋಸ್ಟ್, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ–583 213. | ಮಾಚಹಳ್ಳಿ ವೃತ್ತ, ಆತಗೂರು ಹೋಬಳಿ, ಮದ್ದೂರು ತಾಲ್ಲೂಕು | ತಹಸೀಲ್ದಾರ್. ಮದ್ದೂರು ತಾಲ್ಲೂಕು |
| 21 | ದೇವಪ್ಪ ಬಿನ್ ನಾರಾಯಣ, ಸಾ:ಬೀರಣಕಲ್ ತಾಂಡಾ ವಾಡಿಗೆರ ಪೋಸ್ಟ್ ಶಹಾಪೂರ ತಾಲ್ಲೂಕು, ಯಾದಗಿರಿ ಜಿಲ್ಲೆ–585355. | ಬನ್ನಹಳ್ಳಿ ವೃತ್ತ, ಸಿ.ಎ ಕೆರೆ ಹೋಬಳಿ 1ನೇ ವೃತ್ತ, ಮದ್ದೂರು ತಾಲ್ಲೂಕು | ತಹಸೀಲ್ದಾರ್. ಮದ್ದೂರು ತಾಲ್ಲೂಕು |
| | **ಪರಿಶಿಷ್ಠ ಪಂಗಡ** | | |
| 22 | ವಾಸುದೇವ.ಕೆ.ಎನ್. ಬಿನ್ ಕಿತ್ತೂರು ನಾಗಪ್ಪ, ಅಸಗೋಡ್ ಜಗಳೂರು ತಾಲ್ಲೂಕು ದಾವಣಗೆರೆ ಜಿಲ್ಲೆ–577 513. | ಹಳೇಬೀಡು ವೃತ್ತ, ಮೇಲುಕೋಟೆ ಹೋಬಳಿ, ಪಾಂಡವಪುರ ತಾಲ್ಲೂಕು | ತಹಸೀಲ್ದಾರ್. ಪಾಂಡವಪುರ ತಾಲ್ಲೂಕು |
| 23 | ನಂದೀಶ.ಎನ್. ಬಿನ್ ನಂಜುಂಡನಾಯಕ, ಬಂಡಳ್ಳಿ ಗ್ರಾಮ & ಅಂಚೆ ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ–571 439. | ಹಲಗೂರು ವೃತ್ತ, ಹಲಗೂರು ಹೋಬಳಿ, ಮಳವಳ್ಳಿ ತಾಲ್ಲೂಕು | ತಹಸೀಲ್ದಾರ್. ಮಳವಳ್ಳಿ ತಾಲ್ಲೂಕು |
| | **ವರ್ಗ:2ಎ** | | |
| 24 | ಭಾರತಿ.ಎನ್. ಬಿನ್ ನಂಜಪ್ಪ, ತಿಮ್ಮರಾಯನಹಳ್ಳಿ, ಕಲ್ಕೆರೆ ಅಂಚೆ, ತಿಪಟೂರು ತಾಲ್ಲೂಕು, ತುಮಕೂರು–ಜಿಲ್ಲೆ – 572 202. | ಭೂಮಿಕೇಂದ್ರ ನಾಗಮಂಗಲ ತಾಲ್ಲೂಕು | ತಹಸೀಲ್ದಾರ್. ನಾಗಮಂಗಲ ತಾಲ್ಲೂಕು |
| 25 | ಲೋಹಿತ್ ಹಡಗಲಿ ಬಿನ್ ರಾಮಪ್ಪ.ಹೆಚ್., ಹ್ಯಾರಡ ಗ್ರಾಮ & ಪೋಸ್ಟ್, ಹೂವಿನಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ–583 217. | ನವಿಲೆ ವೃತ್ತ, ಆತಗೂರು ಹೋಬಳಿ, ಮದ್ದೂರು ತಾಲ್ಲೂಕು | ತಹಸೀಲ್ದಾರ್. ಮದ್ದೂರು ತಾಲ್ಲೂಕು |
| 26 | ಹರಪ್ಪನಹಳ್ಳಿ ಮಂಜುನಾಥ ಬಿನ್ ಹರಪನಹಳ್ಳಿ ಬಸಪ್ಪ, ಕಂಚಿಕೇರಿ ಗ್ರಾಮ & ಪೋಸ್ಟ್, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ–583 125 | ಮಾದನಾಯಕನಹಳ್ಳಿ ವೃತ್ತ, ಆತಗೂರು ಹೋಬಳಿ, ಮದ್ದೂರು ತಾಲ್ಲೂಕು | ತಹಸೀಲ್ದಾರ್. ಮದ್ದೂರು ತಾಲ್ಲೂಕು |
| 27 | ಕರುಣ.ಸಿ.ಜಿ. ಬಿನ್ ಗಂಗಾಧರಯ್ಯ.ಸಿ.ಎಂ., ಕನಕದಾಸ ನಗರ, ಚಿಕ್ಕನಾಯ್ಕನಹಳ್ಳಿ ಟೌನ್ & ತಾಲ್ಲೂಕು, ತುಮಕೂರು–572 214. | ಚುಂಚನಹಳ್ಳಿ ವೃತ್ತ, ಬೆಳ್ಳೂರು ಹೋಬಳಿ, ನಾಗಮಂಗಲ ತಾಲ್ಲೂಕು | ತಹಸೀಲ್ದಾರ್. ನಾಗಮಂಗಲ ತಾಲ್ಲೂಕು |
| 28 | ಮಂಜುಳ.ಕೆ. ಬಿನ್ ಚಂದ್ರಪ್ಪ.ಕೆ. ಇಟ್ಟಗಿ ಪೋಸ್ಟ್, ಹೂವಿನ ಹಡಗಲಿ ತಾಲ್ಲೂಕು, ಬಳ್ಳಾರಿ–583 220. | ಭೂಮಿ ಕೇಂದ್ರ , ಕೆ.ಆರ್.ಪೇಟೆ ತಾಲ್ಲೂಕು ಕಛೇರಿ | ತಹಸೀಲ್ದಾರ್, ಕೆ.ಅರ್.ಪೇಟೆ ತಾಲ್ಲೂಕು |

| ಕ್ರಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಕರ್ತವ್ಯ ನಿರ್ವಹಿಸಬೇಕಾದ ಕಛೇರಿ /ವೃತ್ತ | ಯಾವ ಕಛೇರಿಯಲ್ಲಿ ಹಾಜರಾಗಬೇಕು. |
|---|---|---|---|
| | **ವರ್ಗ:3ಎ** | | |
| 29 | ಶೃತಿ.ಕೆ.ಬಿ. ಬಿನ್ ಬಸವರಾಜು,<br>ಕೆ.ಪಿ.ದೊಡ್ಡಿ ಗ್ರಾಮ, ಬಿದರಹಳ್ಳಿ ಅಂಚೆ,<br>ಸಿ.ಎ.ಕೆರೆ ಹೋಬಳಿ ಮದ್ದೂರು ತಾಲ್ಲೂಕು,<br>ಮಂಡ್ಯ–571 422. | ಮುಟ್ಟನಹಳ್ಳಿ ವೃತ್ತ, ಸಿ.ಎ.ಕೆರೆ ಹೋಬಳಿ 1ನೇ ವೃತ್ತ, ಮದ್ದೂರು ತಾಲ್ಲೂಕು | ತಹಸೀಲ್ದಾರ್. ಮದ್ದೂರು ತಾಲ್ಲೂಕು |
| | **ವರ್ಗ:3ಬಿ** | | |
| 30 | ಪಂಪಾಪತಿ.ವಿ. ಬಿನ್ ವೀರೇಶ್.ವಿ.<br>ಇಟ್ಟಗಿ ಪೋಸ್ಟ್, ಹಡಗಲಿ ತಾಲ್ಲೂಕು,<br>ಬಳ್ಳಾರಿ–583 220. | ಕಾಮನಹಳ್ಳಿ ವೃತ್ತ, ಕಸಬಾ ಹೋಬಳಿ ಕೆ.ಆರ್.ಪೇಟೆ ತಾಲ್ಲೂಕು | ತಹಸೀಲ್ದಾರ್.<br>ಕೆ.ಆರ್.ಪೇಟೆ ತಾಲ್ಲೂಕು |
| 31 | ಬಿಸಜಾಕ್ಷಿ ಬಿನ್ ಶಿವಣ್ಣ,<br>ನಂ.71, ಬೆಣ್ಣೇನಹಳ್ಳಿ,ಗುರಗದಹಳ್ಳಿ ಅಂಚೆ,<br>ತಿಪಟೂರು ತಾಲ್ಲೂಕು,<br>ತುಮಕೂರು–572 201. | ಭೂಮಿಕೇಂದ್ರ ನಾಗಮಂಗಲ ತಾಲ್ಲೂಕು | ತಹಸೀಲ್ದಾರ್.<br>ನಾಗಮಂಗಲ ತಾಲ್ಲೂಕು |
| | **ವರ್ಗ:CAT-I** | | |
| 32 | ಹೊನ್ನೇಶ.ಬಿ. ಬಿನ್ ಹನುಮಂತಪ್ಪ.ಬಿ.,<br>ಇಟ್ಟಗಿ ಪೋಸ್ಟ್, ಹೂವಿನಡಗಲಿ ತಾಲ್ಲೂಕು,<br>ಬಳ್ಳಾರಿ–583 220. | ಬಲ್ಲೇನಹಳ್ಳಿ ವೃತ್ತ, ಬೂಕಿನಕೆರೆ ಹೋಬಳಿ ಕೆ.ಆರ್.ಪೇಟೆ ತಾಲ್ಲೂಕು | ತಹಸೀಲ್ದಾರ್.<br>ಕೆ.ಆರ್.ಪೇಟೆ ತಾಲ್ಲೂಕು |

ಎಲ್ಲಾ ಅಭ್ಯರ್ಥಿಗಳು ಸಾರ್ವಜನಿಕ ಸೇವೆಗೆ ಕಂಕಣಬದ್ದವಾಗಿ ನಿಷ್ಠೆ, ಪ್ರಾಮಾಣಿಕತೆ ಹಾಗೂ ನಿಷ್ಪಕ್ಷಪಾತವಾಗಿ ಕರ್ತವ್ಯ ನಿರ್ವಹಿಸಲು ಸೂಚಿಸಿದೆ.

**ಷರತ್ತುಗಳು**

1) ಮೇಲ್ಕಂಡ ಅಭ್ಯರ್ಥಿಗಳು ಈ ಆದೇಶ ದಿನಾಂಕದಿಂದ 15 ದಿನಗಳೊಳಗಾಗಿ ಸಂಬಂಧಿಸಿದ ತಹಸೀಲ್ದಾರ್‌ರವರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ಹಾಜರಾಗುವುದು. ಈ ನೇಮಕವನ್ನು ಒಂದು ವೇಳೆ ತಿರಸ್ಕರಿಸಿದ್ದಲ್ಲಿ 7 ದಿನಗಳೊಳಗಾಗಿ ಲಿಖಿತ ರೂಪದಲ್ಲಿ ತಿಳಿಸಕ್ಕದ್ದು.

2) ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ವೇಳೆಯಲ್ಲಿ ಈ ಕೆಳಕಂಡ ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗಾಗಿ ಹಾಜರು ಪಡಿಸಬೇಕು 1) ಪಿ.ಯು.ಸಿ. ಅಂಕಪಟ್ಟಿ 2) ಎಸ್‌ಎಸ್‌ಎಲ್‌ಸಿ ಅಂಕಪಟ್ಟಿ/ಹುಟ್ಟಿದ ದಿನಾಂಕದ ದೃಡೀಕರಣ 3) ನಡತೆ ಪ್ರಮಾಣ ಪತ್ರ 4) ವೈದ್ಯಕೀಯ ಪ್ರಮಾಣ ಪತ್ರ 5) ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ).

3) ಅಭ್ಯರ್ಥಿಯು ತನ್ನ ವಾಸಸ್ಥಳ ಕ್ಷೇತ್ರಕ್ಕೆ ಸಂಬಂಧಿಸಿದ ಕನಿಷ್ಠ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ನಡತೆ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಕರ್ತವ್ಯಕ್ಕೆ ಹಾಜರಾಗುವ ವೇಳೆಯಲ್ಲಿ ಹಾಜರು ಪಡಿಸತಕ್ಕದ್ದು.

4) ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ ಅವಧಿಯಲ್ಲಿದ್ದು (ಪ್ರೋಬೇಷನರಿ) ಅವರು ಈ ಅವಧಿಯಲ್ಲಿ ಕೆಳಗೆ ನಮೂದಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು 1) ಅಕೌಂಟ್ಸ್ ಲೋಯರ್ 2) ರೆವಿನ್ಯೂ ಲೋಯರ್ 3) ಕನ್ನಡ ಭಾಷಾ ಪರೀಕ್ಷೆ (ಎಸ್‌ಎಸ್‌ಎಲ್‌ಸಿ ಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ ಕನ್ನಡ ಭಾಷಾ ಪರೀಕ್ಷೆಯನ್ನು ಪಾಸು ಮಾಡತಕ್ಕದ್ದು) ಈ ಅವಧಿಯಲ್ಲಿ ನಿಗಧಿತ ಇಲಾಖಾ ಪರೀಕ್ಷೆಗಳನ್ನು ತೇರ್ಗಡೆಯಾಗದಿದ್ದಲ್ಲಿ ಅಥವಾ ಸೇವೆ ತೃಪ್ತಿಕರವಾಗಿರದಿದ್ದಲ್ಲಿ ಅವರನ್ನು ಸೇವೆಯಿಂದ ತೆಗೆದು ಹಾಕಲಾಗುವುದು.

5) ಈ ನೇಮಕಾತಿಯ ಸಂಪೂರ್ಣ ತಾತ್ಕಾಲಿಕವಾಗಿದ್ದು, ಸರ್ಕಾರವು ಇಚ್ಚಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸುಳ್ಳು ಮಾಹಿತಿ ನೀಡಿ ಉದ್ಯೋಗ ಪಡೆದಿರುವುದು ಕಂಡು ಬಂದಲ್ಲಿ ಅವರನ್ನು ಯಾವುದೇ ಸಮಯದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೇ ಸೇವೆಯಿಂದ ತೆಗೆದು ಹಾಕಲಾಗುವುದು.

6) ಅಭ್ಯರ್ಥಿಗಳು ಸೇವೆಗೆ ಹಾಜರಾಗುವ ಸಂದರ್ಭದಲ್ಲಿ ಭಾರತದ ಸಂವಿಧಾನಾತ್ಮಕವಾಗಿ ಗೊತ್ತುಪಡಿಸಿದ ನಮೂನೆಯಲ್ಲಿ "ಪ್ರಮಾಣ ವಚನ" ಸ್ವೀಕಾರ ಮಾಡತಕ್ಕದ್ದು.

7) ಅಭ್ಯರ್ಥಿಗಳು ಸರ್ಕಾರದ ಆದೇಶ ಸಂ: ಎಫ್‌ಡಿ (ಎನ್‌ಪಿಎಲ್) 04 ಪಿಇಟಿ 2005 ದಿನಾಂಕ: 31–3–2006ರಲ್ಲಿ ಜಾರಿಗೆ ನೀಡಿದ ಹೊಸ ನಿವೃತ್ತಿ ವೇತನ ನೀತಿಗೆ ಒಳಪಟ್ಟಿರುತ್ತಾರೆ.

8) ಸರ್ಕಾರದ ಸುತ್ತೋಲೆ ಸಂ:ಕಂ.ಇ 54 ಬಿಎಸ್‌ಸಿ 2007 ದಿನಾಂಕ: 27–3–2007 ರನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ಜಿಲ್ಲೆಯಲ್ಲಿ ಕನಿಷ್ಠ 5 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.

9) ಅಭ್ಯರ್ಥಿಗಳು ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೊಂದಾಯಿಸಿದ ಗುರುತಿನ ಚೀಟಿಯನ್ನು ತಹಸೀಲ್ದಾರ್‌ರಲ್ಲಿ ಹಾಜರುಪಡಿಸತಕ್ಕದ್ದು, ತಹಸೀಲ್ದಾರ್‌ರು ಅದನ್ನು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರೆಂಡರ್ ಮಾಡುವುದು.

10) ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958: ಕರ್ನಾಟಕ ನಾಗರೀಕ ಸೇವಾ(ಸಿಸಿಎ) ನಿಯಮಾವಳಿ 1957/ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ದರಾಗಿರುತ್ತಾರೆ.

11) ಇದು ನೇರನೇಮಕಾತಿ ಹುದ್ದೆ ಆದ ಕಾರಣ ಅಭ್ಯರ್ಥಿಯು ಸೇವೆಗೆ ಸೇರಿದ ದಿನಾಂಕದಿಂದ ಜೇಷ್ಠತೆಯನ್ನು ಪರಿಗಣಿಸಲಾಗುವುದು.

12) ಗ್ರಾಮ ಲೆಕ್ಕಿಗ ಹುದ್ದೆಗೆ ನೇಮಕಾತಿ ಹೊಂದಿರುವುದರಿಂದ, ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾಗ ರೂ 1000/– (ರೂಪಾಯಿ ಒಂದು ಸಾವಿರ ಮಾತ್ರ) ಭದ್ರತಾ ಠೇವಣಿಯನ್ನು ನಗದು ರೂಪದಲ್ಲಾಗಲೀ ಅಥವಾ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕವಾಗಲೀ ತೊಡಗಿಸಿ,ಮುಚ್ಚಳಿಕೆ ಪತ್ರವನ್ನು ಛಾಪಾ ಕಾಗದದಲ್ಲಿ ಬರೆಯಿಸಿ ಒಬ್ಬರ ಜಾಮೀನು ಕೊಡತಕ್ಕದ್ದು. ತಹಸೀಲ್ದಾರ್‌ರು ಸದರಿ ರಾಷ್ಟ್ರೀಯ ಉಳಿತಾಯ ಪತ್ರವನ್ನು ಸರ್ಕಾರಕ್ಕೆ ಪ್ಲೆಡ್ಜ್ ಮಾಡಿಕೊಳ್ಳತಕ್ಕದ್ದು.

13) ಅಭ್ಯರ್ಥಿಯು ಇಲಾಖೆಯಿಂದ ಕಾಲಕಾಲಕ್ಕೆ ನಿಗಧಿಪಡಿಸಿದ ಹಾಗೂ ನಿಗಧಿಪಡಿಸಲಾಗುವ ವಿವಿಧ ಪರೀಕ್ಷೆ/ ತರಭೇತಿಗಳನ್ನು ಯಶಸ್ವಿಯಾಗಿ ಮುಗಿಸತಕ್ಕದ್ದು.

14) ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು ಹಾಗೂ ಮೇಲೆ ಸೂಚಿಸಿದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಮುಂಚಿನ ಸೇವೆಯಿಂದ ಬಿಡುಗಡೆ ಆದೇಶ ಪಡೆದಿರಬೇಕು.

15) ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣ ಭತ್ಯೆ ಅಥವಾ ಇತರೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.

16) ಆಯ್ಕೆಯಾಗಿರುವ ಅಭ್ಯರ್ಥಿಗಳು ಅವರನ್ನು ನೇಮಿಸಿರುವ ಸ್ಥಳದಲ್ಲಿ ಕಡ್ಡಾಯವಾಗಿ ವಾಸ ಮಾಡಗಬೇಕು. ಈ ಬಗ್ಗೆ ಒಂದು ಪ್ರಮಾಣ ಪತ್ರವನ್ನು (ನಮೂನೆಯಂತೆ) ನೋಟರಿಯವರಿಂದ ಪ್ರಮಾಣೀಕರಿಸಿ ಹಾಜರುಪಡಿಸಬೇಕು.

17) ತಾಲ್ಲೂಕು ಕಛೇರಿಯ ಭೂಮಿ ಕೇಂದ್ರಕ್ಕೆ ನೇಮಕಾತಿ ಹೊಂದಿರುವ ಅಭ್ಯರ್ಥಿಗಳು ಗ್ರಾಮಲೆಕ್ಕಿಗರ ಹುದ್ದೆಯಿಂದ ಪದೋನ್ನತಿ ಹೊಂದುವ ವರೆಗೂ ತಾಲ್ಲೂಕುಗಳ ಭೂಮಿ ಕೇಂದ್ರದಲ್ಲಿಯೇ ಕಾರ್ಯನಿರ್ವಹಿಸಬೇಕಾಗಿದ್ದು ಯಾವುದೇ ಕಾರಣಕ್ಕೂ ವೃತ್ತಕ್ಕೆ ವರ್ಗಾವಣೆ ಹೊಂದಲು ಅವಕಾಶವಿರುವುದಿಲ್ಲ.

19) ನೇಮಕಾತಿಗೊಳಿಸಲಾದ ಸ್ಥಳ/ ಕಛೇರಿಯನ್ನು ಯಾವುದೇ ಕಾರಣಕ್ಕೂ ಬದಲಾವಣೆ ಮಾಡಲಾಗುವುದಿಲ್ಲ. ಸ್ಥಳ ಬದಲಾವಣೆ ಮಾಡುವಂತೆ ಒತ್ತಡ ತಂದಲ್ಲಿ ಅಂತಹ: ಅಭ್ಯರ್ಥಿಗಳ ನೇಮಕಾತಿ ಆದೇಶವನ್ನು ರದ್ದುಗೊಳಿಸಲಾಗುತ್ತದೆ.

20) ಗ್ರಾಮ ಲೆಕ್ಕಿಗರ ಆಯ್ಕೆ ಮತ್ತು ನೇರನೇಮಕಾತಿ ಪ್ರಾಧಿಕಾರಿಯವರಾದ ಜಿಲ್ಲಾಧಿಕಾರಿ, ಮಂಡ್ಯ ಜಿಲ್ಲೆ, ಮಂಡ್ಯರವರು ಸದರಿ ಆದೇಶವನ್ನು ಮಾರ್ಪಡಿಸುವ ಹಾಗೂ ರದ್ದು ಪಡಿಸುವ ಸಂಪೂರ್ಣ ಅಧಿಕಾರವನ್ನು ಹೊಂದಿರುತ್ತಾರೆ.

**ಡಾ:ಪಿ.ಸಿ.ಜಾಫರ್,** ಭಾ.ಆ.ಸೇ
ಅಧ್ಯಕ್ಷರು,
ಗ್ರಾಮ ಲೆಕ್ಕಿಗರ ನೇರ ನೇಮಕಾತಿ ಆಯ್ಕೆ ಪ್ರಾಧಿಕಾರ
ಮತ್ತು ಜಿಲ್ಲಾಧಿಕಾರಿಗಳು,ಮಂಡ್ಯ ಜಿಲ್ಲೆ, ಮಂಡ್ಯ.

**ಪಿ.ಆರ್.29**

## OFFICE OF THE REGISTRAR GENERAL, HIGH COURT OF KARNATAKA, HIGH COURT BUILDINGS, BANGALORE-560001

**NOTIFICATION No. HCE 6/2009, dated 21st December 2011.**

**RECRUITMENT OF CANDIDATES TO THE POST OF STENOGRAPHERS**

**LAST DATE FOR RECEIPT OF APPLICATIONS : 25TH JANUARY 2012.**

Applications in the prescribed proforma appended hereto are hereby invited from the applicants, who are possessing qualification as detailed below as on the last date fixed for receipt of applications for recruitment to 11 posts of Stenographers

(which includes 8 Backlog posts for SC category + 2 Backlog posts for ST category) on the establishment of High Court of Karnataka, Bangalore.

2. **Method of Recruitment :** Selection of candidates will be made in accordance with the High Court of Karnataka Service (Conditions of Service and Recruitment) Rules, 1973 and the High Court of Karnataka Service (Direct Recruitment by Selection) Rules, 1984 as amended from time to time.

3. **Minimum Qualification :**

a. Must posses a Degree from a recognised university or equivalent Examination.

b. The Senior Grade Examination in English Shorthand with 60% of aggregate marks or the Proficiency Grade Examination in English Shorthand and

c. Senior Grade Examination in Typewriting in English, conducted by the Department of Public Instruction of the Karnataka Secondary Education Board or equivalent qualification.

d. Certificate in Computer Word Processing or equivalent.

**Note :** 1. **Preference will be given to those candidates who possess the qualification of Senior Grade Examination in Typewriting and Shorthand in Kannada Language.**

4. **Scale of Pay :** Rs. 8000-200-8600-225-9500-250-10500-300-12300-350-14400-400-14800.

5. **Classification of vacancies :**

| Category | Women Candidates | Rural Candidates | Kannada | Displaced from Projects | Ex-service men | Unreserved | Total |
|---|---|---|---|---|---|---|---|
| SCHEDULED CASTE (BACKLOG POSTS) | 2 | 2 | 1 | 1 | 1 | 1 | 8 |
| SCHEDULED TRIBE (BACKLOG POSTS) | 1 | 1 | - | - | - | - | 2 |
| CATEGORY-III(A) | 1 | - | - | - | - | - | 1 |
| TOTAL | 4 | 3 | 1 | 1 | 1 | 1 | 11 |

6. **Probation :** The applicant if appointed shall be initially on probation for a period of two years or for extended period if necessary.

7. **Age limit :** Applicants must have attained the age of 18 years and must not have attained the age of :-

(a) 40 years in the case of a person belonging to Scheduled Caste or Scheduled Tribe or Category-I of other Backward Classes.

(b) 38 years in the case of a person belonging to Category-II-A or II-B or III-A or III-B of Other Backward Classes ; and

(c) 35 years for others.

8. Those candidates called for Test/Interview will have to appear before the authorities in the premises of the High Court of Karnataka, Bangalore at their own cost.

9. Those persons, who attempt to obtain extraneous support by any means for his/her candidature from officials or non-officials, shall not be eligible for appointment.

10. **Application fee :** Every application (excluding applications by Scheduled Caste/Scheduled Tribe/ Category-I Applicants) shall accompany Crossed Indian Postal Order for Rs. 250/- (Rupees Two Hundred and Fifty only) in favour of the Registrar General, High Court of Karnataka, Bangalore 560001. (Fee once paid shall not be refunded under any circumstances) (SC/ST and Category-I candidates are exempted from payment of fee).

11. **Application Form :-** Application in the prescribed proforma shall be filled in by the candidates in their own handwriting and shall accompany self attested copies of the following certificates :-

    (a) Three Certificates of character, one from the Principal/ Head of the Institution in which he/she had last studied and two from respectable persons not related to him/her, testifying to his/her character.

    (b) Marks Cards of Degree/Equivalent examinations and English Senior Grade Shorthand or proficiency Grade Shorthand Examinations and Typewriting Examinations.

    (c) Persons claiming the benefit of reservations under SC/ST shall produce a certificate in the form prescribed by the Government issued by the competent authority.

    (d) SSLC or any other equivalent certificate showing the date of birth.

    (e) Persons claiming the benefit of reservations under Category-I/II-A/II-B/III-A/III-B shall produce a certificate in the form prescribed by the Government issued by the competent authority.

    (f) Persons claiming reservation under rural quota/Physically Handicapped quota/Displaced from Projects/ Kannada Medium/ Ex-servicemen shall produce certificates issued by competent authority.

    (g) A passport size photo shall be affixed at the place provided on the application.

**Note :** Incomplete applications shall be liable to be rejected without notice. Original Certificates and testimonials are to be submitted only at the time of test/interview. Candidates shall not forward the original documents alongwith the application.

12. **Last date for receipt of application**

    (i) Applications complete in all respects shall reach the Registrar General, High Court of Karnataka, High Court Buildings, Bangalore-560001 on or before 25th JANUARY 2011 (5.00 P.M.). on top of the cover containing the application the following words shall be written :

    **"Application for the Post of Stenographer"**

    Applications received beyond the date so fixed will be rejected.

    (ii) In-service candidates shall submit their application through their official superiors so as to reach the Registrar General, High Court of Karnataka, High Court Buildings, Bangalore-560001, not later than the date fixed for receipt of applications.

    (iii) If the last date fixed for the receipt of applications happens to be a General Holiday, the next working day shall be the last date for receipt of applications.

BY ORDER OF HON'BLE THE ACTING CHIEF JUSTICE,

**P. KRISHNA BHAT**

REGISTRAR GENERAL

**FORM OF APPLICATION FOR RECRUITMENT TO THE POSTS OF STENOGRAPHERS IN THE HIGH COURT OF KARNATAKA, BANGALORE**

AFFIX
PASSPORT
SIZE PHOTO

To,

**The Registrar General**
**High Court of Karnataka, Bangalore**

| | | |
|---|---|---|
| 1. | Name of the applicant in full (in Block letters) | |
| 2. | Name of his/her father/ husband | |
| 3. | Gender | |
| 4. | Age and Date of Birth (as mentioned in the SSLC or equivalent certificate) | |
| 5. | Postal Address<br>(in block letters)<br>(a) Permanent Postal address<br>(b) Present postal address<br>(c) Telephone No. if any | |
| 6. | Whether the applicant is presently employed ? If so furnish the details of employment and monthly income. | |
| 7. | Occupation of Parents/ Guardian. | |
| 8. | Annual Income of Parents/ Guardian. | |
| 9. | Qualification : | |
| 10. | a) Whether the Applicant belongs to Scheduled Castes/ Scheduled Tribes/ Category-I/ Category-II(a)/ II(b)/ III(a)/ III(b). If so, the same should be indicated. A copy of the Certificate in support of the claim should be attached. | |
| 11. | Whether the applicant has credited the prescribed fee in the form of postal order and whether he/she has enclosed the same. (Mention the postal order number and date). | |
| 12. | Whether the applicant claims Rural candidate quota and if so, whether relevant certificate is enclosed. | |
| 13. | Whether the applicant claims quota of Physically handicapped. /Displaced from Projects/ Kannada Medium/ Ex-servicemen. If so whether relevant certificate issued by competent authority is enclosed. | |
| 14. | Whether the applicant is / was a Party to any Criminal proceedings. If yes, furnish detailed information. | |

I do hereby solemnly and sincerely affirm that the statement made and the information furnished above are true. Should it however be found that any information furnished herein is untrue in material particulars, I realise that I am liable to criminal prosecution and I am also agreeable to forego the claim for public services under the State Government.

PLACE :

DATE : SIGNATURE OF THE CANDIDATE.

**P.R. No. 03**

**ಆಡಳಿತಾಧಿಕಾರಿ, ಅಡ್ವೋಕೇಟ್ ಜನರಲ್ ರವರ ಕಛೇರಿ, ಬೆಂಗಳೂರು**

**ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಹುದ್ದೆಗಳಿಗಾಗಿ ಅರ್ಜಿ ಆಹ್ವಾನ**

**ಅಧಿಸೂಚನೆ**

**ಸಂಖ್ಯೆ :187:ಎಜಿ:ಎಇಸ್‌ಟಿ:2011-12, ದಿನಾಂಕ:08-02-2012**

**ನೇಮಕಾತಿ ಸಮಿತಿಗಳ ಜಾಹೀರಾತುಗಳು**

ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಾನುಸಾರ ಶೀಘ್ರಲಿಪಿಗಾರರ ಬೆರಳಚ್ಚುಗಾರರ ಹುದ್ದೆಗಳ ಭರ್ತಿಗಾಗಿ ಅರ್ಹತೆಯುಳ್ಳ ಅಭ್ಯರ್ಥಿಗಳಿಂದ ನಿಗಧಿಪಡಿಸಿದ ಅರ್ಜಿ ನಮೂನೆ-1 ರಲ್ಲಿ ಅರ್ಜಿಗಳನ್ನು ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ.

ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 15-03-2012.

**ಅರ್ಜಿಗಳನ್ನು ಸಲ್ಲಿಸಬೇಕಾದ ವಿಳಾಸ:-** **ಆಡಳಿತಾಧಿಕಾರಿ,** ಅಡ್ವೋಕೇಟ್ ಜನರಲ್‌ರವರ ಕಛೇರಿ,
ಉಚ್ಚನ್ಯಾಯಾಲಯದ ಕಟ್ಟಡ, ಬೆಂಗಳೂರು-560 001.

**ಶೀಘ್ರಲಿಪಿಗಾರರ ವೇತನ ಶ್ರೇಣಿ ರೂ:** 8000-200-8600-225-9500-250-10500-300-12300-350-14400-400-14800.

**ಬೆರಳಚ್ಚುಗಾರರ ವೇತನ ಶ್ರೇಣಿ ರೂ:** 5800-100-6000-125-6500-150-7000- 175-7800-200-8400-225-9500-250-10500.

**ಶೀಘ್ರಲಿಪಿಗಾರರ ಹುದ್ದೆಗಳ ವರ್ಗೀಕರಣ**

| ಪರಿಶಿಷ್ಟ ಪಂಗಡ | ಸಾಮಾನ್ಯ ವರ್ಗ | ಪರಿಶಿಷ್ಟ ಜಾತಿ | ವರ್ಗ -3ಬಿ | ವರ್ಗ -2ಎ | ವರ್ಗ-3ಎ |
|---|---|---|---|---|---|
| ಪ. ಪಂ - 1 (ಮಹಿಳೆ) | ಸಾಮನ್ಯ ವರ್ಗ -1 (ಮಾ. ಸೈ)<br>ಸಾಮಾನ್ಯ ವರ್ಗ - 1 (ಸಾಮಾನ್ಯ)<br>ಸಾಮಾನ್ಯ ವರ್ಗ - 1 (ಮಹಿಳೆ)<br>ಸಾಮಾನ್ಯ ವರ್ಗ - 1 (ಗ್ರಾ. ಅ) | ಪ.ಜಾ - 1 (ಸಾಮಾನ್ಯ) | ವರ್ಗ -3ಬಿ-1 (ಸಾಮಾನ್ಯ) | ವರ್ಗ -2ಎ-1 (ಸಾಮಾನ್ಯ) | ವರ್ಗ- 3ಎ- 1 (ಮಹಿಳೆ) |
| **ಒಟ್ಟು - 01** | **ಒಟ್ಟು - 04** | **ಒಟ್ಟು - 01** | **ಒಟ್ಟು - 01** | **ಒಟ್ಟು - 01** | **ಒಟ್ಟು - 01** |

**ಶೀಘ್ರಲಿಪಿಗಾರರ ಹುದ್ದೆಗೆ ವಿದ್ಯಾರ್ಹತೆಗಳು :** 1. ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ವಿದ್ಯಾರ್ಹತೆ.

2. ಆಂಗ್ಲ ಮತ್ತು ಕನ್ನಡ ಬೆರಳಚ್ಚು ಮತ್ತು ಶೀಘ್ರಲಿಪಿ ಪ್ರೌಢದರ್ಜೆ ಅಥವಾ ತತ್ಸಮಾನ ವಿದ್ಯಾರ್ಹತೆ.

3. ಕಂಪ್ಯೂಟರ್ ವಿದ್ಯಾರ್ಹತೆ ಇರುವ ಅಭ್ಯರ್ಥಿಗಳಿಗೆ ಅದ್ಯತ ನೀಡಲಾಗುವುದು

**ಬೆರಳಚ್ಚುಗಾರರ ಹುದ್ದೆಗಳ ವರ್ಗೀಕರಣ**

| ಸಾಮಾನ್ಯ ವರ್ಗ | ವರ್ಗ -3ಎ | ವರ್ಗ -3ಬಿ | ವರ್ಗ -2ಎ |
|---|---|---|---|
| ಸಾಮಾನ್ಯ ವರ್ಗ - 1 (ಮಹಿಳೆ)<br>ಸಾಮಾನ್ಯ ವರ್ಗ -1 (ಗ್ರಾ. ಅ)<br>ಸಾಮಾನ್ಯ ವರ್ಗ - 1 (ಮಾ. ಸೈ) | ವರ್ಗ -3ಎ-1 (ಸಾಮಾನ್ಯ) | ವರ್ಗ-3ಬಿ-1 (ಸಾಮಾನ್ಯ) | ವರ್ಗ-2ಎ-1 (ಗ್ರಾ. ಅ) |
| **ಒಟ್ಟು - 03** | **ಒಟ್ಟು - 01** | **ಒಟ್ಟು - 01** | **ಒಟ್ಟು - 01** |

**ಬೆರಳಚ್ಚುಗಾರರ ಹುದ್ದೆಗೆ ವಿದ್ಯಾರ್ಹತೆಗಳು :**

1. ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ವಿದ್ಯಾರ್ಹತೆ.
2. ಆಂಗ್ಲ ಮತ್ತು ಕನ್ನಡ ಬೆರಳಚ್ಚು ಪ್ರೌಢದರ್ಜೆ ಅಥವಾ ತತ್ಸಮಾನ ವಿದ್ಯಾರ್ಹತೆ.
3. ಕಂಪ್ಯೂಟರ್ ವಿದ್ಯಾರ್ಹತೆ ಇರುವ ಅಭ್ಯರ್ಥಿಗಳಿಗೆ ಅದ್ಯತೆ ನೀಡಲಾಗುವುದು.

**ವಯೋಮಿತಿ:** ಅರ್ಜಿ ಸಲ್ಲಿಸಿರುವ ಕೊನೆಯ ದಿನಾಂಕದಂದು ಕನಿಷ್ಟ 18 ವರ್ಷಗಳು ತುಂಬಿರಬೇಕು, ಮತ್ತು ಈ ಕೆಳಕಂಡ ಗರಿಷ್ಟ ವಯೋಮಿತಿಯನ್ನು ಮೀರಿರಬಾರದು.

1) ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡ :
ಪ್ರವರ್ಗ – 1 : 38 ವರ್ಷಗಳು
2) ಸಾಮಾನ್ಯ ವರ್ಗ : 33 ವರ್ಷಗಳು
3) ಇತರೆ ಹಿಂದುಳಿದ ವರ್ಗಗಳು : 36 ವರ್ಷಗಳು

**: ಟಿಪ್ಪಣಿ :**

1. ನಿಗಧಿತ ಅರ್ಜಿ ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ನೇಮಕಾತಿಗಾಗಿ ಅರ್ಜಿ ನಮೂನೆ (ಭಾಗ–1), ಸರ್ಕಾರಿ ಸೇವಾ ಪುಸ್ತಕದ ಮಳಿಗೆ : ಸೆಂಟ್ರಲ್ ಬುಕ್ ಡಿಪೋ : ಅಂಗೀಕೃತ ಮಾರಾಟಗಾರರಲ್ಲಿ ದೊರೆಯುತ್ತದೆ.

2. ಅರ್ಜಿಯೊಂದಿಗೆ ರೂ.(50–00) ಐವತ್ತು ರೂಪಾಯಿಯ ಪೋಸ್ಟಲ್ ಆರ್ಡರನ್ನು ಆಡಳಿತಾಧಿಕಾರಿ, ಅಡ್ವೋಕೇಟ್ ಜನರಲ್‌ರವರ ಕಛೇರಿ, ಉಚ್ಚನ್ಯಾಯಲಯದ ಕಟ್ಟಡ, ಬೆಂಗಳೂರು–560 001, ಇವರ ಹೆಸರಿನಲ್ಲಿ ಪಡೆದು ಲಗತ್ತಿಸತಕ್ಕದ್ದು.

(ಈ ಅಧಿಸೂಚನೆಯ ದಿನಾಂಕದ ಹಿಂದಿನ ಹದಿನೈದು ದಿವಸಗಳೊಳಗಾಗಿ ಪಡೆದ ಪೋಸ್ಟಲ್ ಆರ್ಡರ್ ಮಾತ್ರ ಲಗತ್ತಿಸತಕ್ಕದ್ದು. ತೀರಾ ಹಳೆಯ ದಿನಾಂಕದ ಪೋಸ್ಟಲ್ ಆರ್ಡರ್‌ಗಳನ್ನು ಲಗತ್ತಿಸಬಾರದು). ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ಪ್ರವರ್ಗ – 1 ಕ್ಕೆ ಸೇರಿದವರಿಗೆ ವಿನಾಯಿತಿ ಇದೆ.

3. ಅರ್ಜಿ ಭರ್ತಿ ಮಾಡುವಾಗ ಅಭ್ಯರ್ಥಿಗಳು ನೀಡುವ ವಿವರಗಳು ತಪ್ಪಿರಬಾರದು ಮತ್ತು ಯಾವ ವಿವರಗಳನ್ನು ಮುಚ್ಚಿಡಬಾರದು, ಅರ್ಜಿ ಜೊತೆಗೆ ಲಗತ್ತಿಸಲಾದ ದಾಖಲೆಗಳಲ್ಲಿ ನೀಡಲಾದ ವಿವರಗಳನ್ನು ತಿದ್ದಬಾರದು ಅಥವಾ ಬದಲಾಯಿಸಬಾರದು.

4. ಅಭ್ಯರ್ಥಿಗಳ ನೇಮಕಾತಿ ಮಾಡುವಾಗ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95, ದಿನಾಂಕ: 20 ನೇ ಜೂನ್ 1995 ರಂತೆ, ಮತ್ತು ಸಿಆಸುಇ 97 ಸೇನೇನಿ 2002, ದಿನಾಂಕ : 22–11–2002 ರಂತೆ, ಮಿಸಲಾತಿ ನಿಯಮಗಳನ್ನು ಅನುಸರಿಸಲಾಗುವುದು.

5. ಅಪೂರ್ಣವಾದ, ಲಗತ್ತುಗಳಿಲ್ಲದ ಮತ್ತು ಕೊನೆಯ ದಿನಾಂಕ ಮುಗಿದ ನಂತರ ಬಂದ ಅರ್ಜಿಗಳನ್ನು ಸೂಚನೆಯಿಲ್ಲದೆ ತಿರಸ್ಕರಿಸಲಾಗುವುದು.

**ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲೆಗಳು :**

1. ಸದರಿ ಹುದ್ದೆಗೆ ಕೇಳಿರುವ ವಿದ್ಯಾರ್ಹತೆಗೆ ಸಂಬಂಧಪಟ್ಟಂತೆ (ದ್ವಿಪ್ರತಿಯಲ್ಲಿ) ಅಂಕಪಟ್ಟಿಗಳು.

2. ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡಕ್ಕೆ ಮತ್ತು ಇತರೆ ಪ್ರವರ್ಗಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಜಾತಿ ಪ್ರಮಾಣ ಪತ್ರದ ಪ್ರತಿಗಳನ್ನು ಲಗತ್ತಿಸಬೇಕು.

**ವಿಶೇಷ ಸೂಚನೆಗಳು :**

1. ಆಯ್ಕೆಯಾದ ಅಭ್ಯರ್ಥಿಗಳು ಬೆಂಗಳೂರು : ಗುಲ್ಬರ್ಗಾ : ಧಾರವಾಡ : ಕೆ.ಎ.ಟಿ. ಘಟಕ ಬೆಂಗಳೂರು, ಇಲ್ಲಿ ಕೆಲಸ ನಿರ್ವಹಿಸತಕ್ಕದ್ದು.

2. ಸರ್ಕಾರಿ ಇಲಾಖೆಗಳಲ್ಲಿ ಅಥವಾ ಇತರ ಸಂಸ್ಥೆಗಳಲ್ಲಿ ಈಗಾಗಲೇ ಕೆಲಸ ಮಾಡುತ್ತಿರುವವರು ತಮ್ಮ ಮೇಲಾಧಿಕಾರಿಗಳ ಮೂಲಕ ಅರ್ಜಿ ಸಲ್ಲಿಸಬೇಕು.

3. ಅರ್ಜಿಗಳನ್ನು ಹೊಂದಿದ ಲಕೋಟೆಯ ಮೇಲೆ " ಅಡ್ವೋಕೇಟ್ ಜನರಲ್‌ರವರ ಇಲಾಖೆಯಲ್ಲಿ ಬೆರಳಚ್ಚುಗಾರರ : ಶೀಘ್ರಲಿಪಿಗಾರರ ಹುದ್ದೆಗೆ ಅರ್ಜಿ " ಎಂದು ನಮೂದಿಸತಕ್ಕದ್ದು.

**ಎಂ. ಕೃಷ್ಣಪ್ಪ**
ಆಡಳಿತಾಧಿಕಾರಿ
ಅಡ್ವೋಕೇಟ್ ಜನರಲ್‌ರವರ ಕಛೇರಿ,
ಉಚ್ಚ ನ್ಯಾಯಾಲಯದ ಕಟ್ಟಡ, ಬೆಂಗಳೂರು–560 001.

**ಪಿ.ಆರ್.32**

## ಅಬಕಾರಿ ಇಲಾಖೆ

### ಜಿಲ್ಲಾಧಿಕಾರಿಗಳ ಕಛೇರಿ, ವಾಹನ ಚಾಲಕರ ನೇಮಕಾತಿ ಪ್ರಾಧಿಕಾರ, ರಾಮನಗರ –562159.

### ತಿದ್ದುಪಡಿ

**ಸಂ.ಇಎಕ್ಸ್‌ಇ/ಆರ್‌ಎನ್‌ಆರ್/ಸಿಬ್ಬಂದಿ/ವಾಚಾನೇನೇ/59/2011–12, ದಿನಾಂಕ: 06.02.2012.**

ಕರ್ನಾಟಕ ಸರ್ಕಾರದ ರಾಮನಗರ ಜಿಲ್ಲೆಯ ಅಬಕಾರಿ ಇಲಾಖೆಯಲ್ಲಿ ಖಾಲಿ ಇರುವ ವಾಹನ ಚಾಲಕರ 3 ಹುದ್ದೆಗಳನ್ನು ಭರ್ತಿ ಮಾಡಲು ದಿನಾಂಕ: 23.01.2012ರಲ್ಲಿ ಅಧಿಸೂಚನೆ ಹಾಗೂ ಪತ್ರಿಕಾ ಪ್ರಕಟಣೆಗಾಗಿ ಅಧಿಸೂಚನೆಯನ್ನು ಪ್ರಕಟಿಸಿದ್ದು, ಸದರಿ ಅಧಿಸೂಚನೆಗಳ ಪುಟ ಸಂ.2, ಕ್ರಮ ಸಂ.5ರ ವಯೋಮಿತಿಯಡಿಯಲ್ಲಿ ಸಾಮಾನ್ಯ ಅಭ್ಯರ್ಥಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ 29–40 ಎಂದಿರುವ ವ೦ಯೋಮಿತಿ೦ಯನ್ನು ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು.

| | |
|---|---|
| ಎಸ್.ಸಿ | 18–40 |
| ಎಸ್.ಟಿ | 18–40 |
| ಸಾಮಾನ್ಯ | 18–35 |

ಅಂತೆಯೇ ಅರ್ಜಿ ನಮೂನೆಯ ಷರತ್ತುಗಳಲ್ಲಿ ವಯೋಮಿತಿಗೆ ಸಂಬಂಧಿಸಿದಂತೆ ಸಾಮಾನ್ಯ ಅಭ್ಯರ್ಥಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ 40 ವರ್ಷ ಮೀರಿರಬಾರದು ಎಂದಿರುವುದನ್ನು **ಸಾಮಾನ್ಯ ಅಭ್ಯರ್ಥಿಯ ವಯೋಮಿತಿ 35 ವರ್ಷ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ 40 ವರ್ಷ ಮೀರಿರಬಾರದು** ಎಂದು ಓದಿಕೊಳ್ಳತಕ್ಕದ್ದು.

ಜಿಲ್ಲಾಧಿಕಾರಿಗಳು ಮತ್ತು ಅಧ್ಯಕ್ಷರು,
ವಾಹನ ಚಾಲಕರ ನೇಮಕಾತಿ ಪ್ರಾಧಿಕಾರ,
ರಾಮನಗರ ಜಿಲ್ಲೆ, ರಾಮನಗರರವರ ಪರವಾಗಿ.

**ಪಿ.ಆರ್.30**

## ಅಬಕಾರಿ ಉಪ ಆಯುಕ್ತರ ಕಛೇರಿ, ವಾಹನ ಚಾಲಕರ ನೇಮಕಾತಿ ಸಮಿತಿ, ಚಿಕ್ಕಬಳ್ಳಾಪುರ ಜಿಲ್ಲೆ

## ಅಧಿಸೂಚನೆ

**ಸಂ:ಇಎಕ್ಸ್‌ಇ/ಚಿಪುರ/ವಾಚಾ/ನೇರ ನೇಮಕಾತಿ/145/2011–12, ಚಿಕ್ಕಬಳ್ಳಾಪುರ, ದಿನಾಂಕ:06/02/2012**

**ವಿಷಯ:–** ಅಬಕಾರಿ ಇಲಾಖೆಯಲ್ಲಿ ಖಾಲಿ ಇರುವ 3 ವಾಹನ ಚಾಲಕರ ಹುದ್ದೆಗಳಿಗೆ ನೇರ ನೇಮಕಾತಿಯಿಂದ ಭರ್ತಿ ಮಾಡಲು ಅರ್ಜಿ ಆಹ್ವಾನ.

**ಉಲ್ಲೇಖ:–** 1) ಸರ್ಕಾರದ ಆದೇಶ ಸಂ:ಆಇ/150/ಇಪಿಎಸ್/2010, ದಿನಾಂಕ:11/03/2011.
2) ಅಬಕಾರಿ ಆಯುಕ್ತರ ಪತ್ರ ಸಂ:ಇಸಿಇ/32ವಾ.ಚಾ./ನೇಮಕಾತಿ/2008, ದಿನಾಂಕ:17/11/2011 ಮತ್ತು 12/12/2012.
3) ಈ ಕಛೇರಿಯ ಪತ್ರದ ಸಮಸಂಖ್ಯೆ ದಿನಾಂಕ:28/01/2012.

1. **ಹುದ್ದೆಗಳ ವರ್ಗೀಕರಣ:** 1) ಪರಿಶಿಷ್ಟ ಜಾತಿ – 1 ಹುದ್ದೆ, 2) ಸಾಮಾನ್ಯ ಅರ್ಹತೆ – 1 ಹುದ್ದೆ, 3) ಪರಿಶಿಷ್ಟ ಪಂಗಡ – 1 ಹುದ್ದೆ.
2. **ವಯೋಮಿತಿ :** 1) ಸಾಮಾನ್ಯ ಅಭ್ಯರ್ಥಿ 18 ರಿಂದ 35 ವರ್ಷಗಳು, 2) ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಇವರಿಗೆ 18 ರಿಂದ 38 ವರ್ಷಗಳು, 3) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ಪ್ರವರ್ಗ–1 ರ ಅಭ್ಯರ್ಥಿಗಳಿಗೆ 18 ರಿಂದ 40 ವರ್ಷಗಳು.
3. **ವಿದ್ಯಾರ್ಹತೆ :** 7ನೇ ತರಗತಿಯಲ್ಲಿ ಉತ್ತೀರ್ಣವಾಗಿರಬೇಕು. ಅದಾಗ್ಯೂ 7 ನೇ ತರಗತಿಗಿಂತ ಹೆಚ್ಚಿನ ವಿದ್ಯಾರ್ಹತೆ ಹೊಂದಿದ ಅಭ್ಯರ್ಥಿಯನ್ನು ಪರಿಗಣಿಸಲಾಗುವುದು.
4. **ಅರ್ಹತೆ :** ಭಾರಿ ಡ್ರೈವಿಂಗ್ ಲೈಸನ್ಸ್, ದೇಹದಾಢ್ಯತೆ ಪ್ರಮಾಣ ಪತ್ರ ಮತ್ತು ಪ್ರಥಮ ಚಿಕಿತ್ಸೆ ಪ್ರಮಾಣ ಪತ್ರ ಇತರೆ ಪೂರಕ ದಾಖಲಾತಿಗಳು.
5. **ವೇತನ ಶ್ರೇಣಿ :** 5800–100–6000–125–6500–150–7100–175–7800–200–8600–225–9500–250–10500.
6. ಅಭ್ಯರ್ಥಿಯ ಆಯ್ಕೆಯ ನಂತರ ಪೊಲೀಸ್ ತರಬೇತಿ ಮತ್ತು ನಿರ್ವಹಣಾ ಶಾಲೆಗೆ ನಿಯೋಜಿಸಿ ಪ್ರಮಾಣ ಪತ್ರ ಪಡೆದು ಸಲ್ಲಿಸಲು ಸೂಚಿಸಿದೆ. ಈ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸಿದ ನಂತರವಷ್ಟೆ ಅಭ್ಯರ್ಥಿಗೆ ನೇಮಕಾತಿ ಆದೇಶ ನೀಡಲಾಗುವುದು. ಒಂದು ವೇಳೆ ಅಭ್ಯರ್ಥಿಯು ಪ್ರಮಾಣ ಪತ್ರ ಪಡೆಯಲು ವಿಫಲವಾದಲ್ಲಿ ಬೇರೊಬ್ಬ ಅಭ್ಯರ್ಥಿಯನ್ನು ಪರಿಗಣಿಸಲಾಗುವುದು.
7. **ಅರ್ಜಿ ವಿತರಣೆ:** ಎಸ್.ಸಿ. ಎಸ್.ಟಿ. ಯವರಿಗೆ ಅರ್ಜಿ ಶುಲ್ಕವಿರುವುದಿಲ್ಲ, ಇತರೆ ವರ್ಗದವರು ರೂ.5/– ಗಳ ಐ.ಪಿ.ಓ. (ಇಂಡಿಯನ್ ಪೋಸ್ಟಲ್ ಆರ್ಡರ್)ನ್ನು ಈ ಕಛೇರಿಗೆ ನೇರವಾಗಿ ಸಲ್ಲಿಸಿ ಅರ್ಜಿಯನ್ನು ಕಛೇರಿಯ ವೇಳೆಯಲ್ಲಿ ಪಡೆಯಬಹುದು ಅಥವಾ ಅಂಚೆ ಮೂಲಕ ಪಡೆಯಬಹುದು. ಈ ಕಛೇರಿಯ ಈ ಹಿಂದೆ ಕೊನೆಯ ದಿನಾಂಕ:20/02/2012 ಪ್ರಕಟಣೆಯಾಗಿದ್ದು, ಸದರಿ ದಿನಾಂಕವು ಸರ್ಕಾರಿ ರಜೆಯ ಪ್ರಯುಕ್ತ ದಿನಾಂಕ:21/02/2012 ರಂದು ಸಮಯ 5–30 ಗಂಟೆಯೊಳಗೆ ಅರ್ಜಿ ಸಲ್ಲಿಸಲು ಕಡೇ ದಿನವಾಗಿರುತ್ತದೆ.

**ಸದಸ್ಯ ಕಾರ್ಯದರ್ಶಿಗಳು ಹಾಗೂ ಅಬಕಾರಿ ಉಪ ಆಯುಕ್ತರು**
ವಾಹನ ಚಾಲಕರ ನೇಮಕಾತಿ ಸಮಿತಿ,
ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

**ಪಿ.ಆರ್.31**

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ನೇಮಕಾತಿ ಆದೇಶ

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ಜವಾನರ (ಡಿ–ಗ್ರೂಪ್) ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಅಭ್ಯರ್ಥಿಗಳನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ 21-11-2001 ರನ್ವಯ ಪ್ರಕಟಿಸಿರುವ ಬ್ಯಾಕ್‌ಲಾಗ್ ನೇಮಕಾತಿ ನಿಯಮಗಳು 2001.(ದಿನಾಂಕ: 22–11–2001 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)

2. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ EST-2-235/2003-04 ದಿನಾಂಕ 08-04-2011

ಪ್ರಸ್ತಾವನೆ –

ಈ ಇಲಾಖೆಯ ಕೆಳಕಂಡ ಜಿಲ್ಲೆಯಲ್ಲಿ (ಡಿ–ಗ್ರೂಪ್) ಜವಾನರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳನ್ನು ಗುರುತಿಸಿ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಬಾಗಲಕೋಟೆ ಜಿಲ್ಲೆ | ಎರಡು | ಒಂದು | ಮೂರು |

ಮೇಲೆ ಗುರುತಿಸಿದ ಬ್ಯಾಕ್‌ಲಾಗ್ ಹುದ್ದೆಗಳ ನೇಮಕಾತಿ ಮಾಡಿಕೊಳ್ಳುವುದಕ್ಕಾಗಿ ಕೆಳಕಂಡ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಅವರ ಉಲ್ಲೇಖ (2)ರ ರೀ–ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಕೆಳಕಂಡ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಜವಾನರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ ಸಿಬ್ಬಂದಿ(ಬ್ಯಾಲಾ)21/2011–12 ದಿನಾಂಕ 30-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (1) ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (2) ರಲ್ಲಿನ ರೀ–ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಈ ಜಿಲ್ಲೆಯಲ್ಲಿ ಖಾಲಿ ಇರುವ ಜವಾನರ ಹುದ್ದೆಯಲ್ಲಿ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ. 4800-100-6000-125-6500-150-7100-175-7275 ರ ವೇತನ ಶ್ರೇಣಿಯಲ್ಲಿ ತಾತ್ಕಾಲಿಕವಾಗಿ ಜವಾನರೆಂದು ನೇಮಕ ಮಾಡಲಾಗಿದೆ ಹಾಗೂ ಕೆಳಕಂಡ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ಜವಾನರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ.ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ ST | ಜನ್ಮ ದಿನಾಂಕ | 3-7-2004 ರ ಅಂತ್ಯಕ್ಕೆ ಅಭ್ಯರ್ಥಿಯ ವಯಸ್ಸು ವ- ತಿಂ- ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ಜವಾನರೆಂದು ನೇಮಕ ಮಾಡಿದ ಕಛೇರಿ | ಅಭ್ಯರ್ಥಿಯನ್ನು ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಗಂಗಮ್ಮ<br>D/o ಕಾಶಪ್ಪ ಲಗೊಂಡ<br>ಮುಕ್ಕಾಂ: ಹಂದಿಕೇರಾ<br>ತಾ: ಹುಮ್ನಾಬಾದ<br>ಜಿಲ್ಲೆ: ಬೀದರ | ST | 01–06–1972 | 32–01–02 | ಏಳನೇ ತರಗತಿ 67.333 | ಉಪ ನೋಂದಣಿ ಕಛೇರಿ, ಇಳಕಲ್ ಬಾಗಲಕೋಟೆ ಜಿಲ್ಲೆ | ಪರಿಶಿಷ್ಟ ಪಂಗಡ ಮಹಿಳಾ ಅಭ್ಯರ್ಥಿ ಹೆಚ್ಚುವರಿ ಪಟ್ಟಿ |

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಗಳು ಈ ಕೆಳಕಂಡ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು –**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.

2. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.

3. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಪರೀಕ್ಷಾರ್ಥಿ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.

4. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ಯಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

5. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.

6. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್ ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.

7. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗಧಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.

8. ಅಭ್ಯರ್ಥಿಗಳು ಅವರ ಕಾರ್ಯ, ಕರ್ತವ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ತೃಪ್ತಿಕರವಾಗಿ ಮಾಡತಕ್ಕದ್ದು.

9. ಅಭ್ಯರ್ಥಿಗಳು ಅವರ ದುರ್ವರ್ತನೆಯಿಂದ, ದುರ್ನಡತೆಯಿಂದ ಹಾಗೂ ಉದಾಸೀನತೆಯಿಂದ ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಿದಂತೆ ಉಂಟುಮಾಡುವ ಎಲ್ಲಾ ರೀತಿಯ ಆರ್ಥಿಕ ನಷ್ಟಗಳನ್ನು ಸರ್ಕಾರಕ್ಕೆ ಸದರಿ ಅಭ್ಯರ್ಥಿಗಳು ಭರಿಸಿಕೊಡಲು ಬದ್ಧರಾಗಿರುತ್ತಾರೆ ಹಾಗೂ ಹೊಣೆಗಾರರಾಗಿರುತ್ತಾರೆಂದು ತಿಳಿಯತಕ್ಕದ್ದು.

10. ಅಭ್ಯರ್ಥಿಗಳು ಅವರ ಕರ್ತವ್ಯಗಳನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಗಳನ್ನು ಗುಪ್ತವಾಗಿಟ್ಟು ಅದರ ಗೌಪ್ಯತೆಯನ್ನು ಕಟ್ಟುನಿಟ್ಟಾಗಿ ಕಾಪಾಡತಕ್ಕದ್ದು.

11. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.

12. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು. ಹಾಗೂ ಕೆ.ಸಿ.ಎಸ್ (ಸಿ.ಸಿ.ಎ.) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.

13. ಅಭ್ಯರ್ಥಿಗಳು ಸಲ್ಲಿಸಿರುವ ಆಯಾಯ ಮೀಸಲಾತಿ ಪ್ರಮಾಣ ಪತ್ರಗಳ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯಾಯ ಮೀಸಲಾತಿ category ಯಲ್ಲಿ ನೇಮಕ ಮಾಡಿರುವುದರಿಂದ ಸದರಿ ಅಭ್ಯರ್ಥಿಗಳು ಆಯಾಯ ಮೀಸಲಾತಿ categoryಗೆ ಸೇರಿದವರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.

14. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದು ಪಡಿಸಲಾಗುವುದು.

15. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಕೆಲಸಕ್ಕೆ ಹಾಜರಾದ ಕೂಡಲೇ ಮಾಡತಕ್ಕದ್ದು.

16. ಅಭ್ಯರ್ಥಿಯು ಕೆಳಕಂಡ ದಾಖಲೆಗಳನ್ನು ತಾವು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ತಪ್ಪದೇ ಹಾಜರುಪಡಿಸತಕ್ಕದ್ದು.

(1) ಅಭ್ಯರ್ಥಿಯು ತಮ್ಮ passport Size ನ ಎರಡು ಇತ್ತೀಚಿನ ಫೋಟೋ

(2) ವಿದ್ಯಾರ್ಹತೆಯ ಬಗ್ಗೆ ಏಳನೇ ತರಗತಿ ಮೂಲ ಅಂಕಪಟ್ಟಿ (Original)

(3) ಜನ್ಮ ದಿನಾಂಕದ ಬಗ್ಗೆ ಮೂಲ T.C (Original)

(4) ಸಂಬಂಧಪಟ್ಟ ಸರ್ಕಾರಿ ಜಿಲ್ಲಾ ಸರ್ಜನ್‌ನಿಂದ ನಿಗದಿತ ನಮೂನೆಯಲ್ಲಿ ಪಡೆದ ವೈದ್ಯಕೀಯ ದೈಹಿಕ ಪ್ರಮಾಣ ಪತ್ರ (Original) (Physical Fitness Certificate)

(5) ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರ (Original)

**ಅಭ್ಯರ್ಥಿಗಳು ಕೆಳಕಂಡ ನಮೂನೆಗಳನ್ನು ಮತ್ತು ಮುಚ್ಚಳಿಕೆಗಳನ್ನು ಕೆಲಸಕ್ಕೆ ಹಾಜರಾಗುವ ಮುನ್ನ ತಪ್ಪದೇ ಬರೆದು ಕೊಡತಕ್ಕದ್ದು.**

17. ಅಭ್ಯರ್ಥಿಯು ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ಪ್ರತಿಜ್ಞಾ ವಿಧಿಯನ್ನು ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿ ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದು ಕೊಡತಕ್ಕದ್ದು.

18. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28 ರ ರೀತ್ಯ ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿರುವ ಘೋಷಣಾ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.

19 ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ದನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂಗಳ ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ-1 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

20. ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ-2 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

21. ಒಂದು ವೇಳೆ ನಾನು ಈ ಇಲಾಖೆಯಲ್ಲಿ ಜವಾನರೆಂದು ನೇಮಕಾತಿ ಹೊಂದುವ ಮೊದಲು ಅಥವಾ ನಾನು ಜವಾನರೆಂದು ನೇಮಕಾತಿ ಹೊಂದಿ ಈ ಇಲಾಖೆಯಲ್ಲಿ ಜವಾನರಾಗಿ ಸರ್ಕಾರಿ ಕೆಲಸಕ್ಕೆ ಹಾಜರಾದ ದಿನಾಂಕದ ನಂತರ ನಾನು ಸರ್ಕಾರಿ ಸೇವೆಯಿಂದ ಶಾಶ್ವತವಾಗಿ ನಿರ್ಗಮಿಸುವ ದಿನಾಂಕದವರೆಗಿನ ಅವಧಿಯಲ್ಲಿ ಅಂದರೆ ನಾನು ಈ ಇಲಾಖೆಯಲ್ಲಿ ಸರ್ಕಾರಿ ನೌಕರನಾಗಿರುವ ಅವಧಿಯಲ್ಲಿ ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯಾಗಲೀ ಅಥವಾ ಬೇರೆ ಇನ್ಯಾವುದೇ ಸಾರ್ವಜನಿಕರಾಗಲೀ ದಾಖಲೆಗಳ ಸಹಿತ ಸಕಾರಣಗಳೊಂದಿಗೆ ನಾನು ಏಳನೇ ತರಗತಿಯಲ್ಲಿ ತೇರ್ಗಡೆ ಹೊಂದಿಲ್ಲವೆಂದಾಗಲೀ ಅಥವಾ ನಾನು ಸಲ್ಲಿಸಿರುವ ಏಳನೇ ತರಗತಿ ಅಂಕಪಟ್ಟಿಯು ನಕಲಿ (ಖೊಟ್ಟಿ) ಎಂದಾಗಲೀ ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ಆಯ್ಕೆಯನ್ನು ಮತ್ತು ಈ ನನ್ನ ನೇಮಕಾತಿಯನ್ನು ಯಾವುದೇ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಶಾಶ್ವತವಾಗಿ ರದ್ದುಪಡಿಸುವುದಕ್ಕೂ ಹಾಗೂ ಯಾವುದೇ ಕಾರಣ ನೀಡದೇ ಅಥವಾ ಯಾವುದೇ ನೋಟೀಸ್ ನೀಡದೇ

ನನ್ನನ್ನು ಸರ್ಕಾರಿ ಸೇವೆಯಿಂದ ಶಾಶ್ವತವಾಗಿ ವಜಾ ಮಾಡವುದಕ್ಕೂ ನಾನು ಒಪ್ಪಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/– ರೂ. ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ–3 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

22. ಮಹಿಳಾ ಮೀಸಲಾತಿ ಅಡಿಯಲ್ಲಿ ಅಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ.ಎಲ್ ನಾರಾಯಣ – VS ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ಮುಂಬರುವ ಸದರಿ ತೀರ್ಪಿನ ಪ್ರಕಾರ ಮಹಿಳಾ ಅಭ್ಯರ್ಥಿಗಳು ಜವಾನರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ:232:99ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ದಳಾಗಿರುತ್ತೇನೆ ಎಂಬ ಬಗ್ಗೆ 20/– ರೂ.ಗಳ ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ–4 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

23. ಸರ್ಕಾರದವರು ಈ ಹಿಂದೆ ಜಾರಿಯಲ್ಲಿದ್ದ ನಿವೃತ್ತಿ ಪಿಂಚಣಿ ಸೌಲಭ್ಯ ಯೋಜನೆಗೆ ಬದಲಾಗಿ ದಿನಾಂಕ: 01–04–2006 ರಿಂದ ಜಾರಿಗೆ ಬರುವಂತೆ ಸರ್ಕಾರದ ಆದೇಶ ಸಂಖ್ಯೆ: FD(SPL)-04 PET 2005 ದಿನಾಂಕ: 31–03–2006 ರ ಆದೇಶದಲ್ಲಿ ಹೊಸದಾಗಿ New defined Contributory Pension Scheme ಎಂಬ ಹೊಸ ಪಿಂಚಣಿ ಯೋಜನೆಯನ್ನು ಜಾರಿಗೆ ತಂದಿರುತ್ತಾರೆ. ಈ ಹೊಸ ಪಿಂಚಣಿ ಯೋಜನೆಯು ದಿನಾಂಕ: 01–04–2006 ರಿಂದ ಅಥವಾ ತದನಂತರ ನೇಮಕಾತಿ ಹೊಂದಿದ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ ಅನ್ವಯಿಸುತ್ತದೆ ಎಂದು ಆದೇಶ ಮಾಡಿರುತ್ತಾರೆ. ಆದ್ದರಿಂದ ಈ ಜಿಲ್ಲೆಯಲ್ಲಿ ನೇಮಕ ಹೊಂದಿದ ಸದರಿ ನೌಕರರು ದಿನಾಂಕ: 31–03–2006 ರ ಸದರಿ ಸರ್ಕಾರದ ಆದೇಶದನ್ವಯ ಹೊಸ ಪಿಂಚಣಿ ಯೋಜನೆಗೆ ಒಳಪಡುತ್ತಾರೆಂದು ಈ ಮೂಲಕ ಆದೇಶಿಸಿದೆ ಹಾಗೂ ದಿನಾಂಕ: 31–03–2006 ರ ಸದರಿ ಸರ್ಕಾರದ ಆದೇಶದಲ್ಲಿನ ನಿರ್ದೇಶನಕ್ಕೆ ಸದರಿ ನೌಕರರು ಬದ್ಧರಾಗಿರತಕ್ಕದ್ದು.

ನೇಮಕಾತಿ ಪ್ರಾಧಿಕಾರಿ ಹಾಗೂ
ಜಿಲ್ಲಾ ನೋಂದಣಾಧಿಕಾರಿಗಳು,
ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ

**ಪಿ.ಆರ್.28**